ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ : 128(133)

ಮಾನ್ಯ ಸದಸ್ಯರ ಹೆಸರು : ಶ್ರೀ ಕೆ.ಟಿ.ಶ್ರೀಕಂಠೇಗೌಡ(ಪದವೀಧರರ ಕ್ಷೇತ್ರ).

ಉತ್ತರಿಸುವ ದಿನಾಂಕ : 01.02.2021

ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಾಗೂ ಸಕಾಲ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಶಿಕ್ಷಕರು/ಉಪನ್ಯಾಸಕರ "ಕಾಲ್ಪನಿಕ ವೇತನ ಬಡ್ತಿ"(ಅನುದಾನಿತ- ಶಾಲಾ -ಕಾಲೇಜುಗಳಲ್ಲಿ) ಬಗ್ಗೆ ಶ್ರೀ ಬಸವರಾಜ ಹೊರಟ್ಟಿರವರ ನೇತೃತ್ವದಲ್ಲಿ ಸಮಿತಿಯನ್ನು ಯಾವಾಗ ರಚಿಸಲಾಗಿದೆ; | ಶ್ರೀ ಬಸವರಾಜು ಹೊರಟ್ಟಿ ರವರ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ದಿನಾಂಕ:25.09.2014ರಂದು ರಚಿಸಲಾಗಿತ್ತು. ಆರ್ಥಿಕ ಪರಿಣಾಮಗಳನ್ನು ಕರಾರುವಕ್ಕಾಗಿ ನಿರ್ಣಯಿಸುವ ಸಲುವಾಗಿ ಈ ಸಮಿತಿಯನ್ನು ಪುನರುಜ್ಜೀವನಗೊಳಿಸಿ ದಿನಾಂಕ:11.07.2017ರಂದು ವಿಶೇಷ ಸಧನ ಸಮಿತಿಯನ್ನು ಪುನರ್ ರಚಿಸಲಾಗಿದೆ. |
| ಆ | ಸದರಿ ಸಮಿತಿಯು ಯಾವಾಗ ವರದಿಯನ್ನು ಸಲ್ಲಿಸಿದೆ; ವರದಿಯು ಸರ್ಕಾರದ ಗಮನಕ್ಕೆ ಬಂದಿದೆಯೇ; | ದಿನಾಂಕ:15.07.2015 ಮತ್ತು ದಿನಾಂಕ:06.02.2018ರಂದು ಎರಡು ವರದಿಗಳನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ವರದಿಯು ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಇ | ಈ ಸಮಿತಿಯ ವರದಿಯ ಜಾರಿ ಕುರಿತು ಸರ್ಕಾರದ ನಿಲುವೇನು; ಈ ವರದಿಯನ್ನು ಯಾವಾಗ ಜಾರಿಗೆ ತರಲಾಗುವುದು? | ಅನುದಾನ ಸಂಹಿತೆಯ ಪ್ರಕಾರ ಅನುದಾನಕ್ಕೊಳಪಟ್ಟ ಸಿಬ್ಬಂದಿಗೆ ಅನುದಾನ ದೊರೆತ ದಿನಾಂಕದಿಂದ ಮಾತ್ರ ಕನಿಷ್ಟ ವೇತನ ನಿಗದಿ ಮಾಡಬೇಕೆಂದು, ಹಿಂದಿನ ಸೇವಾವಧಿಯನ್ನು ಯಾವುದೇ ಸೇವಾ ಸೌಲಭ್ಯಕ್ಕೆ ಪರಿಗಣಿಸುವಂತಿಲ್ಲ. ಈ ಸಂಬಂಧ ಸರ್ಕಾರವು ದಿನಾಂಕ:01-06-1995 ರಿಂದಲೇ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಕರ್ನಾಟಕ ಖಾಸಗಿ ಅನುದಾನಿತ ಶೈಕ್ಷಣಿಕ ಸಂಸ್ಥೆಗಳ ಸಿಬ್ಬಂಧಿಗಳ (ವೇತನ, ನಿವೃತ್ತಿ ವೇತನ ಮತ್ತು ಇತರೇ ಸೌಲಭ್ಯಗಳ ನಿಯಂತ್ರಣ) ಅಧಿನಿಯಮ 2014ನ್ನು ಜಾರಿಗೆ ತರಲಾಗಿದೆ.<br>ಈ ಅಧಿನಿಯಮವನ್ನು ಅನುದಾನಿತ ಶಿಕ್ಷಣ ಸಂಸ್ಥೆಗಳ ಸಿಬ್ಬಂದಿಗಳು ಪ್ರಶ್ನಿಸಿರುವ ರಿಟ್ ಅರ್ಜಿಗಳಾದ 21216/2014 ಮತ್ತು 14307/2014 ಮತ್ತು ತತ್ಸಂಬಂಧದ ಪ್ರಕರಣಗಳಲ್ಲಿ ಮಾನ್ಯ ಉಚ್ಚನ್ಯಾಯಾಲಯವು ದಿನಾಂಕ:10-07-2015ರಂದು ನೀಡಿದ ತೀರ್ಪಿನಲ್ಲಿ ಸದರಿ ಅಧಿನಿಯಮವನ್ನು "struck down " ಮಾಡಿರುತ್ತದೆ.<br><br>ಮೇಲಿನ ಮಾನ್ಯ ನ್ಯಾಯಾಲಯದ ತೀರ್ಪನ್ನು ಪ್ರಶ್ನಿಸಿ ಸರ್ಕಾರವು ಮಾನ್ಯ ಉಚ್ಛನ್ಯಾಯಾಲಯ , ಬೆಂಗಳೂರು ಇಲ್ಲಿ ರಿಟ್ ಅಪೀಲ್ ಸಂಖ್ಯೆ:2476/2015 ಮತ್ತು 2467/2015ನ್ನು ದಾಖಲಿಸಿದೆ. ಮೇಲಿನ ರಿಟ್ ಅರ್ಜಿಗಳಲ್ಲಿ ನೀಡಿದ ತೀರ್ಪಿಗೆ ದಿನಾಂಕ:27-11-2015ರಂದು ತಡೆಯಾಜ್ಞೆ ನೀಡಿರುತ್ತದೆ.ಸದರಿ ತಡೆಯಾಜ್ಞೆಯು ಪ್ರಸ್ತುತ ಜಾರಿಯಲ್ಲಿದ್ದು, ಪ್ರಕರಣವು ಮಾನ್ಯ ನ್ಯಾಯಾಲಯದಲ್ಲಿ ಬಾಕಿಯಿರುತ್ತದೆ.<br>ಸಮಿತಿಯ ವರದಿ ಮತ್ತು ಇಲಾಖೆಗಳಲ್ಲಿನ ವಾಸ್ತವ ಅಂಕಿಅಂಶಗಳನ್ನು ಪರಿಶೀಲಿಸಲಾಗಿ,ಹಾಲಿ ನೀಡಲಾಗುತ್ತಿರುವ ವೇತನಕ್ಕೆ ಅನುದಾನ ರಹಿತ ಅವಧಿಯನ್ನು ಪರಿಗಣನೆಗೆ ತೆಗೆದುಕೊಂಡು ವೇತನವನ್ನು ಪರಿಷ್ಕರಿಸಿದಲ್ಲಿ ಹೆಚ್ಚುವರಿಯಾಗಿ ವಾರ್ಷಿಕವಾಗಿ ರೂ.359.87ಕೋಟಿಗಳ ಅನುದಾನವು |

| | | |
|---|---|---|
| | | ಬೇಕಾಗುತ್ತದೆ. ಆದರೆ, ಅವರಿಗೆ ಹಿಂಬಾಕಿ ಮತ್ತು ಪಿಂಚಣಿಗಾಗಿ ತಗಲುವ ಅಂದಾಜು ವೆಚ್ಚವು ಪ್ರಸ್ತಾಪಿತ ರೂ.359.87 ಕೋಟಿಗಳಲ್ಲಿ ಒಳಗೊಂಡಿರುವುದಿಲ್ಲ. ಸದರಿ ಮೊತ್ತವಾದ ರೂ.359.87/- ಕೋಟಿ ಒಂದು ವರ್ಷಕ್ಕೆ ಬೇಕಾದ ಹೆಚ್ಚುವರಿ ಮೊತ್ತವಾಗುತ್ತದೆ.ಈ ಅನುಕೂಲ ಪಡೆಯುವ ಸಿಬ್ಬಂದಿ ಪೂರ್ಣ ಸೇವಾವಧಿಯಲ್ಲಿ ಪಡೆಯುವ ಮೊತ್ತದ ಒಟ್ಟು ಮೊತ್ತದ ಲೆಕ್ಕಾಚಾರ ಇಲಾಖೆಗಳಲ್ಲಿ ಇನ್ನು ಆಗಿರುವುದಿಲ್ಲ.ಹಾಗೆಯೇ ನಿವೃತ್ತಿ ಸೌಲಬ್ಯಗಳ ಒಟ್ಟಾರೆ ಆರ್ಥಿಕ ಹೊರೆ ರೂ.1637.61ಕೋಟಿ ಗಳಾಗಿದ್ದು,ಇದರ ವರ್ಷವಾರು ಆರ್ಥಿಕ ಹೊರೆ ಸಹ ಲೆಕ್ಕಹಾಕಿರುವುದಿಲ್ಲ.ಈ ಎರಡೂ ಮೊತ್ತಗಳ ಮಾಹಿತಿಯನ್ನು ಸಂಗ್ರಹಿಸಲಾಗುತ್ತಿದೆ. ಅನುದಾನರಹಿತ ಸೇವಾವಧಿಯ ಸಂಬಂಧ ನೀಡಬೇಕಾದ ವೇತನ ಬಾಕಿ ಮೊತ್ತ ರೂ.3083.54 ಕೋಟಿಗಳೆಂದು ಅಂದಾಜಿಸಲಾಗಿದೆ.<br>ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ, ಸಮಿತಿಯ ಶಿಫಾರಸ್ಸುಗಳನ್ನು ಜಾರಿಗೆ ತರುವಲ್ಲಿ ನಿರ್ದಿಷ್ಟ ನಿಲುವನ್ನು ತಳೆಯಲು ಸರ್ಕಾರಕ್ಕೆ ಸಾಧ್ಯವಾಗಿರುವುದಿಲ್ಲ. |

ಸಂಖ್ಯೆ:ಇಪಿ 38 ಎಸ್‌ಇಎಸ್ 2021

(ಎಸ್.ಸುರೇಶ್‌ಕುಮಾರ್)

ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ

ಹಾಗೂ ಸಕಾಲ ಸಚಿವರು